CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಫೆಬ್ರವರಿ ೧೭, ೨೦೦೫ (ಮಾಘ ೨೮, ಶಕ ವರ್ಷ ೧೯೨೬) | ಸಂಚಿಕೆ ೭ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

### ಟೆಂಡರ್ ಅಧಿಸೂಚನೆ ಸಂಖ್ಯೆ: ಸಿಆಸುಇ 14 ಡಿಇವಿ 2005, ದಿನಾಂಕ: 10ನೇ ಫೆಬ್ರವರಿ 2005

ವಿಧಾನಸೌಧ, ಬಹುಮಹಡಿ ಕಟ್ಟಡದ ಸಂಕೀರ್ಣ (ವಿವಿಧ ಹಂತಗಳು ಸೇರಿದಂತೆ) ಹಾಗೂ ವಿಶ್ವೇಶ್ವರಯ್ಯ ಕೇಂದ್ರ ಕಟ್ಟಡಗಳಲ್ಲಿ ಇಲಿ ಮತ್ತು ಕ್ರಿಮಿಕೀಟ ನಾಶಕ ವ್ಯವಸ್ಥೆಯ ಗುತ್ತಿಗೆಯನ್ನು ದಿನಾಂಕ: 01.04.2005 ರಿಂದ 31.03.2006ರ ಒಂದು ವರ್ಷದ ಅವಧಿಗೆ ವಹಿಸುವ ಬಗ್ಗೆ ಪ್ರಸಿದ್ಧ ಸಂಸ್ಥೆಗಳಿಂದ ಟೆಂಡರನ್ನು ಕರೆಯಲಾಗಿದೆ.

2. ಗುತ್ತಿಗೆ ನಿರ್ವಹಿಸಬೇಕಾದ ಪ್ರದೇಶಗಳ ವಿವರಗಳು ಈ ಕೆಳಗಿನಂತೆ ಇದೆ:
   1) ಸಂಪೂರ್ಣ ವಿಧಾನಸೌಧ ಕಟ್ಟಡ ಹಾಗೂ ಅದರ ಸುತ್ತಮುತ್ತಲಿರುವ ಉದ್ಯಾನವನ
   2) ಬಹುಮಹಡಿ ಕಟ್ಟಡದ ಎಲ್ಲಾ ಹಂತದ ಸಂಪೂರ್ಣ ಕಟ್ಟಡಗಳು ಮತ್ತು ಆವರಣ
   3) ವಿಶ್ವೇಶ್ವರಯ್ಯ ಕೇಂದ್ರ ಕಟ್ಟಡದ ಸಂಪೂರ್ಣ ಕಟ್ಟಡ ಮತ್ತು ಅದರ ಆವರಣ
3. (1) ಈ ಗುತ್ತಿಗೆಯನ್ನು ವಹಿಸುವ ಸಂಸ್ಥೆಯು ಎಲ್ಲಾ 3 ಕಟ್ಟಡಗಳಲ್ಲಿ, ಕಟ್ಟಡ ಒಂದಕ್ಕೆ ಒಬ್ಬರಂತೆ ಪ್ರತಿದಿನ ಒಬ್ಬರನ್ನು ಈ ಕೆಲಸಗಳಿಗಾಗಿ ನೇಮಿಸತಕ್ಕದ್ದು.
   (2) ಈ ರೀತಿ 3 ಕಟ್ಟಡಗಳಲ್ಲಿ ಈ ಕೆಲಸಗಳಿಗೆ ಹಾಜರಾಗುವ ಸಿಬ್ಬಂದಿಯು ಪ್ರತಿ ದಿನ ಬಂದಿರುವ ದೂರುಗಳನ್ನು ಹಿರಿಯ ಮೇಲ್ವಿಚಾರಕರು, ಸಿಆಸುಇ (ಕಾರ್ಯಕಾರಿ) ವಿಧಾನಸೌಧ ಇವರಿಂದ ಪಡೆದುಕೊಂಡು ಸೂಕ್ತ ಕ್ರಮ ಜರುಗಿಸತಕ್ಕದ್ದು.
4. ಟೆಂಡರ್ ಕವರಿನ ಮೇಲೆ "ವಿಧಾನಸೌಧ, ಬಹುಮಹಡಿ ಕಟ್ಟಡ ಹಾಗೂ ವಿಶ್ವೇಶ್ವರಯ್ಯ ಕೇಂದ್ರ ಕಟ್ಟಡಗಳಲ್ಲಿ, ಇಲಿ ಮತ್ತು ಕ್ರಿಮಿಕೀಟ ನಾಶಕ ವ್ಯವಸ್ಥೆ ಗುತ್ತಿಗೆ ಬಗ್ಗೆ" ಎಂದು ಬರೆದಿರತಕ್ಕದ್ದು.
5. ಟೆಂಡರ್‌ನೊಂದಿಗೆ ಇ.ಎಂ.ಡಿ. (ಠೇವಣಿ) ಮೊತ್ತ ರೂ.30,000/-ಕ್ಕೆ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟನ್ನು "ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ)", ಇವರ ಹೆಸರಿಗೆ ಸಲ್ಲಿಸತಕ್ಕದ್ದು. ಇ.ಎಂ.ಡಿ. ಸಂಬಂಧ ಬ್ಯಾಂಕ್ ಡ್ರಾಫ್ಟನ್ನು ಲಗತ್ತಿಸಿರದ ಟೆಂಡರನ್ನು ತಿರಸ್ಕರಿಸಲಾಗುವುದು.
6. ಟೆಂಡರನ್ನು "ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ-1), ಕೊಠಡಿ ಸಂಖ್ಯೆ: 23, ವಿಧಾನಸೌಧ" ಇಲ್ಲಿಗೆ ಸಲ್ಲಿಸತಕ್ಕದ್ದು.
7. ತಿರಸ್ಕೃತಗೊಂಡ ಟೆಂಡರ್‌ದಾರರ "ಇ.ಎಂ.ಡಿ." ಮೊತ್ತವನ್ನು ಕೋರಿಕೆ ಸಲ್ಲಿಸಿದ ದಿನಾಂಕದಿಂದ ಒಂದು ತಿಂಗಳೊಳಗೆ ಮರುಪಾವತಿ ಮಾಡಲಾಗುವುದು.
8. ಯಶಸ್ವಿ ಟೆಂಡರುದಾರರ "ಇ.ಎಂ.ಡಿ." ಹಣವನ್ನು ಸೆಕ್ಯೂರಿಟಿ ಡಿಪಾಸಿಟ್ ಆಗಿ ಉಳಿಸಿಕೊಳ್ಳಲಾಗುವುದು. ಗುತ್ತಿಗೆ ಅವಧಿ ಮುಗಿದ ನಂತರ ಗುತ್ತಿಗೆದಾರರ ಮೇಲೆ ಯಾವುದೇ ಕ್ಲೇಮು ಬಾಕಿ ಇಲ್ಲದಿದ್ದಲ್ಲಿ, ಈ ಹಣವನ್ನು ಮರುಪಾವತಿ ಮಾಡಲಾಗುವುದು.
9. ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ: 18.3.2005 ಮಧ್ಯಾಹ್ನ 3.00 ಗಂಟೆಯೊಳಗೆ. ಟೆಂಡರ್ ಸಲ್ಲಿಸುವವರು ಒಂದು ವರ್ಷದ ಹಣವನ್ನು ನಮೂದಿಸತಕ್ಕದ್ದು.
10. ಟೆಂಡರನ್ನು ದಿನಾಂಕ: 18.3.2005ರ ಮಧ್ಯಾಹ್ನ 4.00ಕ್ಕೆ ಉಪ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ), ಕೊಠಡಿ ಸಂಖ್ಯೆ: 23, ಇವರ ಕೊಠಡಿಯಲ್ಲಿ ತೆರೆಯಲಾಗುವುದು.
11. ಯಾವುದಾದರೂ ಒಂದು ಅಥವಾ ಎಲ್ಲಾ ಟೆಂಡರ್‌ಗಳನ್ನು ತಿರಸ್ಕರಿಸುವ ಅಥವಾ ಯಾವುದಾದರೊಂದನ್ನು ಒಪ್ಪಿಕೊಳ್ಳಲು ಕರ್ನಾಟಕ ಸರ್ಕಾರದ ಮುಖ್ಯ ಕಾರ್ಯದರ್ಶಿಗಳಿಗೆ ಪೂರ್ಣ ಹಕ್ಕಿದೆ. ಇದಕ್ಕಾಗಿ ಅವರು ಯಾವುದೇ ಕಾರಣಗಳನ್ನು ನೀಡಬೇಕಾಗಿಲ್ಲ.
12. ಗುತ್ತಿಗೆಯ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ ಇ.ಎಂ.ಡಿ. ಮೊತ್ತವನ್ನು ಮುಟ್ಟುಗೋಲು ಹಾಕುವ ಹಕ್ಕು ಸರ್ಕಾರಕ್ಕೆ ಇರುತ್ತದೆ.

13. ಯಶಸ್ವಿ ಟೆಂಡರ್‌ದಾರರಿಗೆ ಗುತ್ತಿಗೆ ಹಣವನ್ನು 2 ಕಂತುಗಳಲ್ಲಿ ಬಿಡುಗಡೆ ಮಾಡಲಾಗುವುದು. ಮೊದಲನೇ ಕಂತನ್ನು ದಿನಾಂಕ: 1.10.2005ರ ನಂತರ ಪಾವತಿ ಮಾಡಲಾಗುವುದು. 2ನೇ ಮತ್ತು ಅಂತಿಮ ಕಂತನ್ನು ದಿನಾಂಕ: 1.4.2006ರ ನಂತರ ಪಾವತಿ ಮಾಡಲಾಗುವುದು.
14. ಈ ಸಂಬಂಧ ಒಂದು ಕರಾರು ಪತ್ರವನ್ನು ನಿಗದಿತ ಮೊತ್ತದ ಛಾಪಾ ಕಾಗದದಲ್ಲಿ ಆ ಸಂಸ್ಥೆಯು ಜಾರಿ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ರವಿಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1).

ಪಿ.ಆರ್. 92

**ಕರ್ನಾಟಕ ಮೃಗಾಲಯ ಪ್ರಾಧಿಕಾರ**
**ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು-83**
**ಸಂಕ್ಷಿಪ್ತ ಟೆಂಡರ್ ಪ್ರಕಟಣೆ**
**ಸಂಖ್ಯೆ: ಎ1/ಬಬಪಾ/ಸಿಆರ್-28/2004-05, ದಿನಾಂಕ: 7ನೇ ಫೆಬ್ರವರಿ 2005**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕಿನಲ್ಲಿ ಸಂಗ್ರಹವಾಗುವ ಕಸಕಡ್ಡಿ ಇತ್ಯಾದಿಗಳನ್ನು ಸಾಗಿಸುವ ಕುರಿತು ಟೆಂಡರುಗಳನ್ನು ಕರೆಯಲಾಗಿದೆ. ಟೆಂಡರು ಅರ್ಜಿಯನ್ನು ಮೊಹರು ಮಾಡಿದ ಲಕೋಟೆಯಲ್ಲಿ ಈ ಕಛೇರಿಗೆ ದಿನಾಂಕ: 16.03.2005ರ ಮಧ್ಯಾಹ್ನ 3.00 ಗಂಟೆಯ ಒಳಗಾಗಿ ಈ ಕೆಳಗೆ ಸಹಿ ಮಾಡಿರುವವರ ಕಛೇರಿಯಲ್ಲಿ ಸಲ್ಲಿಸಲು ತಿಳಿಸಲಾಗಿದೆ.

| ಕ್ರಮ ಸಂಖ್ಯೆ | ವಿವರಗಳು | ಟೆಂಡರಿಗೆ ಇಡಲಾದ ಅಂದಾಜು ಮೊತ್ತ | ಸಲ್ಲಿಸಬೇಕಾದ ಇ.ಎಂ.ಡಿ. |
|---|---|---|---|
| 1 | ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕಿನ ಮೃಗಾಲಯದಲ್ಲಿ ಸಂಗ್ರಹವಾಗುವ ಕಸಕಡ್ಡಿ ಇತ್ಯಾದಿಗಳನ್ನು ಸಾಗಿಸುವ ಕುರಿತು. | 1.82 ಲಕ್ಷ | ರೂ.10,000/- |
| 2 | ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕಿನ ಮೃಗಾಲಯದ ಹೊರಭಾಗದಲ್ಲಿ ಪ್ಲಾಸ್ಟಿಕ್ ಇತ್ಯಾದಿಗಳನ್ನು ಸಂಗ್ರಹಿಸಿ ಸಾಗಿಸುವ ಕುರಿತು. | 1.00 ಲಕ್ಷ | ರೂ.5,000/- |

**ಸೂಚನೆ:**

ಟೆಂಡರುದಾರರು ರೂ.200/- ಮತ್ತು ತೆರಿಗೆಗಳ ಪ್ರತ್ಯೇಕದ ಟೆಂಡರು ಫಾರಂನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ದಿನಾಂಕ: 12/03/2005 ರಿಂದ 16/03/2005ರ ಮಧ್ಯಾಹ್ನ 12.00 ಘಂಟೆಯವರೆಗೆ ಪಡೆಯಬಹುದು. ಇನ್ನೂ ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಕೆ.ಬಿ. ಮಾರ್ಕಂಡೇಯ, ಭಾ.ಅ.ಸೇ.**
ಕಾರ್ಯನಿರ್ವಾಹಕ ನಿರ್ದೇಶಕರು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು-83.

**ZOO AUTHORITY OF KARNATAKA**
**OFFICE OF THE EXECUTIVE DIRECTOR & DEPUTY CONSERVATOR OF FORESTS, BANNERGHATTA BIOLOGICAL PARK, BANGALORE-83**
**BRIEF TENDER NOTIFICATION**
**No.A1/BBP/CR-28/2004-05, Dated: 7th February 2005**

Sealed tenders are invited from the registered contractors of this unit for Disposal of waste materials etc., collected in the Bannerghatta Biological Park and will be received by the undersigned in this office up to 3.00 PM on 16/03/2005 as noted in the schedule below:

**SCHEDULE**

| Sl. No. | Particulars | Amount put to tender | EMD in the form of DD |
|---|---|---|---|
| 1 | Disposal of waste meterials etc. collected inside the zoo premises. | Rs.1.82 lakhs | Rs.10,000/- |
| 2 | Collection & transportation of plastics and other waste materials outside the zoo premises. | Rs.1.00 lakh | Rs.5,000/- |

**Note:**

The tender forms will be available in the office of the undersigned during the office working hours from 12.03.2005 and up to 12.00 noon on 16/03/2005 on payment of Rs.200/- per form plus taxes. Other details can be had from the office of the undersigned during the office hours on working days.

**K.B. MARKANDAIAH IFS**
Executive Director & Deputy Conservator of Forests,
Bannerghatta Biological Park, Bangalore-83.

PD-26

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ**
**ಅಧಿಸೂಚನೆ ಸಂಖ್ಯೆ: ಬಿ3-ಶ್ರೀಗಂಧ:ಸಿಆರ್-10/2004-05, ದಿನಾಂಕ: 9ನೇ ಫೆಬ್ರವರಿ 2005**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಸರ್ಕಾರಿ ಶ್ರೀಗಂಧ ಉಗ್ರಾಣ ಶಿವಮೊಗ್ಗದಲ್ಲಿ ಕೆಳಕಂಡ ಶ್ರೀಗಂಧ ಬಿಳಿಚಕ್ಕೆ ಮತ್ತು ಶ್ರೀಗಂಧದ ಪುಡಿಯನ್ನು ದಿನಾಂಕ: 11.03.2005 ರಂದು ಬೆಳಿಗ್ಗೆ 11.00 ಗಂಟೆಗೆ ಸಾರ್ವಜನಿಕ ಬಹಿರಂಗ ಹರಾಜನ್ನು ಮಾಡಲಾಗುವುದು.

| ಕ್ರ.ಸಂ. | ಶ್ರೀಗಂಧದ ವರ್ಗೀಕರಣ | ಪ್ರಮಾಣ (ಟನ್ನುಗಳಲ್ಲಿ) |
|---|---|---|
| 1 | ರೂಟ್ I | 8.000 |
| 2 | ರೂಟ್ II | 21.000 |
| 3 | ರೂಟ್ III | 1.000 |
| 4 | ಜಾಜ್ ಫೋಕಲ್ I | 2.000 |
| 5 | ಜಾಜ್ ಫೋಕಲ್ II | 2.000 |
| 6 | ಗಟಬದಲ | 0.500 |
| 7 | ಬಾಗಾರದಾದ್ | 0.500 |
| 8 | ಐನ್ ಬಗಾರ್ | 0.500 |
| 9 | ಐನ್‌ಚಿಲ್ಪ | 1.000 |
| 10 | ಚಿರಿಯಾ | 7.000 |
| 11 | ಬಸಲ ಬುಕಣಿ | 2.000 |
| 12 | ಮಿಲ್ಪ ಚಿಲ್ಪಾ | 60.000 |
| 13 | ವೈಟ್ ಚಿಪ್ಸ್ | 20.000 |

ವಿವರಗಳನ್ನು ಸರ್ಕಾರಿ ಶ್ರೀಗಂಧದ ಕೋಠಿ ಅಧಿಕಾರಿಗಳಿಂದ ಪಡೆಯಬಹುದು.

ಪಿ.ಆರ್. 85 ಉಪ ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ.

## ಲೋಕೋಪಯೋಗಿ ಇಲಾಖೆ

## ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಲೋಕೋಪಯೋಗಿ ವಿಭಾಗ, ದಾವಣಗೆರೆ

**ಟೆಂಡರ್ ಅವಧಿ ವಿಸ್ತರಣೆ ಸಂಖ್ಯೆ: ಕಾಅಿ/ದಾವಿದಾ/ಎಇ-1/ನಬಾರ್ಡ್ 11/2076/2004-05, ದಿನಾಂಕ: 22ನೇ ಜನವರಿ 2005**

**ವಿಷಯ:** ನಬಾರ್ಡ್-ಆರ್.ಐ.ಡಿ.ಎಫ್-11ರ ಧನಸಹಾಯದ ಅಡಿಯಲ್ಲಿ ದಾವಣಗೆರೆ ಜಿಲ್ಲೆಯ ರಸ್ತೆಗಳ ಅಭಿವೃದ್ಧಿ.

**ಉಲ್ಲೇಖ:** 1) ಈ ಕಾರ್ಯಾಲಯದ ಟೆಂಡರ್ ಪ್ರಕಟಣೆ ಸಂಖ್ಯೆ: 1864/2004-05 ದಿನಾಂಕ: 27.12.2004.

2) ಈ ಕಾರ್ಯಾಲಯದ ಟೆಂಡರ್ ಪ್ರಕಟಣೆ ಸಂಖ್ಯೆ: 1866/2004-05 ದಿನಾಂಕ: 27.12.2004.

ಮೇಲ್ಕಂಡ ಉಲ್ಲೇಖಗಳಲ್ಲಿ ನಬಾರ್ಡ್ ಆರ್.ಐ.ಡಿ.ಎಫ್.-11ರ ಧನಸಹಾಯದಡಿಯಲ್ಲಿ ದಾವಣಗೆರೆ ಜಿಲ್ಲೆಯಲ್ಲಿನ ರಸ್ತೆಗಳ ಅಭಿವೃದ್ಧಿ ಕಾಮಗಾರಿಗಳಿಗೆ ಟೆಂಡರ್ ಅಧಿಸೂಚನೆಯನ್ನು ಹೊರಡಿಸಲಾಗಿತ್ತು. ಅನಿವಾರ್ಯ ಕಾರಣಗಳಿಂದಾಗಿ ಖಾಲಿ ಟೆಂಡರ್ ಫಾರಂಗಳನ್ನು ವಿತರಿಸುವ ಮತ್ತು ಸ್ವೀಕರಿಸುವ ದಿನಾಂಕಗಳನ್ನು ಅನಿರ್ದಿಷ್ಟ ಅವಧಿಯವರೆಗೆ ಮುಂದೂಡಲಾಗಿದೆ. ಷೆಡ್ಯೂಲ್ ದಿನಾಂಕಗಳನ್ನು ಮುಂದೆ ಪ್ರಕಟಿಸಲಾಗುವುದು.

ಪಿ.ಆರ್. 89 ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ವಿಭಾಗ, ದಾವಣಗೆರೆ.

## ಕಲ್ಯಾಣ ಆಯುಕ್ತರವರ ಕಛೇರಿ ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ, ಮೈಷುಗರ್ ಎರಡನೇ ಮಹಡಿ, ರವೀಂದ್ರ ಕಲಾಕ್ಷೇತ್ರದ ಎದುರು, ಜೆ.ಸಿ. ರಸ್ತೆ, ಬೆಂಗಳೂರು-560002 ಇವರು ನೇಮಿಸಿರುವ ಹರಾಜು ಅಧಿಕಾರಿ ಕಾರ್ಮಿಕ ಅಧಿಕಾರಿ, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಬಹಿರಂಗ ಹರಾಜು ಪ್ರಕಟಣೆ ಅಧಿಸೂಚನೆ ಸಂಖ್ಯೆ: ಕಾಅದಾ/ಕಾಕಕೇ/ವಿವ-53/2004-05, ದಿನಾಂಕ: 5ನೇ ಫೆಬ್ರವರಿ 2005**

**ವಿಷಯ:** ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯ ದಾವಣಗೆರೆ ಕಾರ್ಮಿಕ ಕಲ್ಯಾಣ ಕೇಂದ್ರದಲ್ಲಿನ ಪೀಠೋಪಕರಣ, ಹೊಲಿಗೆಯಂತ್ರ, ಆಟಿಕೆ ಸಾಮಗ್ರಿ ಹಾಗೂ ಇತರೆ ಸಾಮಗ್ರಿಗಳನ್ನು ಯಥಾಸ್ಥಿತಿಯಲ್ಲಿ ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಮಂಜೂರಾತಿ ಪತ್ರ ಸಂಖ್ಯೆ: ಕಾಇ-264/ಎಲ್.ಇ.ಟಿ.-04, ದಿನಾಂಕ: 12.1.2005.

2) ಮಾನ್ಯ ಕಲ್ಯಾಣ ಆಯುಕ್ತರು ಬೆಂಗಳೂರು ಇವರ ಕಛೇರಿ ಆದೇಶ ಸಂಖ್ಯೆ: ಕಾಕನಿ/ಲೆಪಶಾ-3/ಕಾಕಕೇ/ಸ್ಟಾಕ್ ವಹಿ/ಸಿಆರ್-118/04-05, ದಿನಾಂಕ: 19.1.2005.

ಉಲ್ಲೇಖ (1)ರ ಸರ್ಕಾರದ ಆದೇಶದ ಪ್ರಕಾರ ದಾವಣಗೆರೆ ಕಾರ್ಮಿಕ ಕಲ್ಯಾಣ ಕೇಂದ್ರಕ್ಕೆ ಸಂಬಂಧಪಟ್ಟ ಅನುಬಂಧದಲ್ಲಿ ತೋರಿಸಿರುವ ಪೀಠೋಪಕರಣ, ಹೊಲಿಗೆ ಯಂತ್ರಗಳು, ಆಟಿಕೆ ಸಾಮಗ್ರಿ ಹಾಗೂ ಇತರೆ ಸಾಮಗ್ರಿಗಳನ್ನು ಹೇಗಿದೆಯೋ ಹಾಗೇ ಇದ್ದ ಸ್ಥಿತಿಯಲ್ಲಿ ದಿನಾಂಕ: 18.3.2005 ರಂದು ಬೆಳಿಗ್ಗೆ 11.00 ಗಂಟೆಗೆ ಕಾರ್ಮಿಕ ಕಲ್ಯಾಣ ಕೇಂದ್ರ ಲೇಬರ್ ಕಾಲೋನಿ ನಿಟ್ಟುವಳ್ಳಿ ರಸ್ತೆ ದಾವಣಗೆರೆ ಈ ಆವರಣದಲ್ಲಿ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದೆಂದು ಸಾರ್ವಜನಿಕರಿಗೆ ಈ ಮೂಲಕ ತಿಳಿಸಲಾಗಿದೆ.

| ಕ್ರ.ಸಂ. | ಬಹಿರಂಗ ಹರಾಜು ಮಾಡುವ ಸಾಮಗ್ರಿಗಳ ವಿವರಗಳು | ಸುಸ್ಥಿತಿ | ದುಸ್ಥಿತಿ | ಒಟ್ಟು |
|---|---|---|---|---|
| 1 | 2 | 3 | 4 | 5 |
| | **1) ಪೀಠೋಪಕರಣಗಳು:** | | | |
| 1 | ಮರದ ಛೇರ್ | - | 02 | 02 |
| 2 | ಮರದ ಸ್ಟೂಲ್ | 03 | - | 03 |
| 3 | ಮರದ ಬೆಂಚು | 03 | - | 03 |
| 4 | ಸ್ಟೀಲ್ ಛೇರ್ಸ್ (ಫೋಲ್ಡಿಂಗ್) | 03 | 01 | 04 |
| 5 | ವಾಚನಾಲಯದ ಮರದ ಟೇಬಲ್ | 01 | 01 | 02 |
| | **ಹೊಲಿಗೆ ಯಂತ್ರಗಳು:** | | | |
| 6 | ಹೊಲಿಗೆ ಯಂತ್ರಗಳು | 03 | - | 03 |
| 7 | ಹೊಲಿಗೆ ಯಂತ್ರಗಳು | 03 | - | 03 |
| 8 | ಹೊಲಿಗೆ ಯಂತ್ರಗಳ ಮುಚ್ಚಳ | 03 | - | 03 |

| 1 | 2 | 3 | 4 | 5 |
|---|---|---|---|---|
| | 2) ಕ್ರೀಡಾ ಸಾಮಗ್ರಿಗಳು | | | |
| 9 | ಕೇರಂ ಬೋರ್ಡ್ | - | 02 | 02 |
| 10 | ಕೇರಂ ಬೋರ್ಡ್ | - | 01 | 01 |
| 11 | ಚೆಸ್ | - | 01 | 01 |
| 12 | ಸ್ನೇಕ್ ಮತ್ತು ಲ್ಯಾಡರ್ | - | 02 | 02 |
| 13 | ರಾಕಿಂಗ್ ಹಾರ್ಸ್ | - | 01 | 01 |
| 14 | ರಾಕಿಂಗ್ ಹಾರ್ಸ್ | - | 01 | 01 |
| 15 | ಸೀಸಾ | - | 01 | 01 |
| 16 | ಸೀಸಾ | - | 01 | 01 |
| 17 | ಬೊಂಬೆಗಳು | - | 06 | 06 |
| 18 | ಬೊಂಬೆಗಳು | - | 06 | 06 |
| 19 | ಬೊಂಬೆಗಳು | - | 01 | 01 |
| 20 | ಬೊಂಬೆಗಳು | - | 01 | 01 |
| 21 | ಬೊಂಬೆಗಳು | 0 | 04 | 04 |
| 22 | ವ್ಹಾಲಿಬಾಲ್ | - | 04 | 04 |
| 23 | ವ್ಹಾಲಿಬಾಲ್ ನೆಟ್ | - | 01 | 01 |
| 24 | ಟೆನಿಕ್ವಾಟ್ ರಿಂಗ್ | - | 01 | 01 |
| 25 | ಟಾಂಗಾ | - | 01 | 01 |
| 26 | ಟಾಂಗಾ | - | 01 | 01 |
| 27 | ಪಂಪ್ | - | 01 | 01 |
| 28 | ರಬ್ಬರ್ ರಿಂಗ್ | - | 01 | 01 |
| 29 | ಟೆನಿಕ್ವಾಟ್ ರಿಂಗ್ | - | 01 | 01 |
| | **3) ಗ್ರಂಥಾಲಯದ ಪುಸ್ತಕಗಳು:** | | | |
| 30 | ಕನ್ನಡ ಪುಸ್ತಕಗಳು | 03 | | 03 |
| 31 | ಕನ್ನಡ ಪುಸ್ತಕಗಳು | 03 | | 03 |
| 32 | ಇಂಗ್ಲಿಷ್ ಪುಸ್ತಕಗಳು | 05 | | 05 |
| 33 | ಉರ್ದು ಪುಸ್ತಕಗಳು | 08 | | 08 |
| 34 | ಕನ್ನಡ ಪುಸ್ತಕಗಳು | 340 | 100 | 440 |
| | **4) ಮನರಂಜನಾ ಸಾಮಗ್ರಿಗಳು:** | | | |
| 35 | ರೇಡಿಯೋ | | 01 | 01 |
| 36 | ಲೌಡ್ ಸ್ಪೀಕರ್ | | 01 | 01 |
| 37 | ಹಾರ್ಮೋನಿಯಂ | | 01 | 01 |
| 38 | ತಬಲ | | 01 | 01 |
| 39 | ಡಗ್ಗ | | 01 | 01 |
| 40 | ಬಿ.ಪಿ.ಎಲ್. ಕಲರ್ ಟಿವಿ | 01 | | 01 |
| 41 | ಸ್ಟೆಬಿಲೈಸರ್ | 01 | | 01 |
| 42 | ಪೈಪ್ | 01 | | 01 |
| 43 | ಆಂಟೇನಾ | 01 | | 01 |
| 44 | ಕೇಬಲ್ ವೈರ್ | 01 | | 01 |
| 45 | ಟಿವಿ ಸ್ಟ್ಯಾಂಡ್ | 01 | | 01 |
| | **5) ಇತರೇ ಸಾಮಗ್ರಿಗಳು:** | | | |
| 46 | ಟೂಬ್‌ಲೈಟ್ ಸೆಟ್ | 04 | 01 | 05 |
| 47 | ಗೊಡ್ರೇಜ್ ಲಾಕ್ | 03 | | 03 |
| 48 | ಸೀಲಿಂಗ್ ಫ್ಯಾನ್ | 02 | | 02 |
| 49 | ವಾಟರ್ ಟ್ಯಾಂಕ್ | 01 | | 01 |
| 50 | ಮರದ ಪೆಟ್ಟಿಗೆ | 01 | | 01 |
| 51 | ಕಟ್ಟಿಂಗ್ ಪ್ಲೇಯರ್ | 01 | | 01 |
| 52 | ಸ್ಕ್ರೂಡ್ರೈವರ್ | 01 | | 01 |
| 53 | ರಬ್ಬರ್ ಸ್ಟ್ಯಾಂಪ್ | 08 | | 08 |
| 54 | ವಾಚನಾಲಯದ ಹಳೆಯ ಪತ್ರಿಕೆಗಳು ದಿ: 1.7.04 ರಿಂದ 18.1.05 ರವರೆಗೆ | | | |

**ಬಹಿರಂಗ ಹರಾಜಿನ ಷರತ್ತು ಮತ್ತು ನಿಯಮಗಳು**

1) ಬಹಿರಂಗ ಹರಾಜಿನಲ್ಲಿ ಭಾಗವಹಿಸುವ ಪ್ರತಿಯೊಬ್ಬ ಸವಾಲುದಾರರು ರೂ.1,000-00 ಗಳನ್ನು ಕಾರ್ಮಿಕ ಅಧಿಕಾರಿಯವರು ದಾವಣಗೆರೆ ಉಪ ವಿಭಾಗ, ದಾವಣಗೆರೆ ಇವರ ಕಛೇರಿಯಲ್ಲಿ ಮುಂಗಡವಾಗಿ ಬಹಿರಂಗ ಹರಾಜಿನ ದಿನಾಂಕದಂದು ಬೆಳಿಗ್ಗೆ 10.00 ಗಂಟೆಗೆ ಠೇವಣಿಮಾಡಿ ನಂತರ ಹರಾಜಿನಲ್ಲಿ ಭಾಗವಹಿಸಬಹುದು. ಠೇವಣಿ ಮಾಡಿದ ಬಿಡ್ಡುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.

2) ಮಾನ್ಯ ಕಲ್ಯಾಣ ಆಯುಕ್ತರು ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ ಬೆಂಗಳೂರು ಇವರಿಂದ ನೇಮಿಸಲ್ಪಟ್ಟ ಕಾರ್ಮಿಕ ಅಧಿಕಾರಿ ದಾವಣಗೆರೆ ಉಪ ವಿಭಾಗ, ದಾವಣಗೆರೆ ಇವರು ಬಹಿರಂಗ ಹರಾಜು ನಡೆಸುವ ಅಧಿಕಾರ ಹೊಂದಿರುತ್ತಾರೆ.

3) ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಮೊತ್ತಕ್ಕೆ ಕರೆದಂತಹ ಸವಾಲುದಾರನನ್ನು ಯಶಸ್ವಿ ಸವಾಲುದಾರನೆಂದು ಪರಿಗಣಿಸಲಾಗುವುದು.

4) ಯಶಸ್ವಿ ಬಿಡ್ಡುದಾರರು ಅಂಗೀಕರಿಸಿ ನಿರ್ಧರಿಸಿದ ಹರಾಜಿನ ಮೊಬಲಗನ್ನು ಕೂಡಲೇ ಸ್ಥಳದಲ್ಲಿ ಪಾವತಿಸಿ ವಸ್ತುಗಳನ್ನು ಪಡೆಯತಕ್ಕದ್ದು, ಮತ್ತು ವಸ್ತುಗಳನ್ನು ವಶಕ್ಕೆ ಪಡೆದುಕೊಂಡು ಎತ್ತುವಳಿ ಮಾಡತಕ್ಕದ್ದು.

5) ಎಲ್ಲಾ ಹಣವನ್ನು ಕಾರ್ಮಿಕ ಅಧಿಕಾರಿಯವರ ಕಛೇರಿಯಲ್ಲಿ ನಗದು ರೂಪದಲ್ಲಿ ಹಣವನ್ನು ತುಂಬಬೇಕು, ಚೆಕ್ಕು ಡಿ.ಡಿ. ಗಳನ್ನು ಸ್ವೀಕರಿಸಲಾಗುವುದಿಲ್ಲ.

6) ಮಾರಾಟ ತೆರಿಗೆಯನ್ನು ಹಾಗೂ ಸರ್ಕಾರಕ್ಕೆ ಪಾವತಿಸಬೇಕಾದ ಇತರೆ ತೆರಿಗೆಗಳನ್ನು ಚಲಾವಣೆಯಲ್ಲಿರುವ ದರಗಳ ನಿಯಮಗಳ ಆಧಾರದ ಮೇಲೆ ಸವಾಲಿನ ಹಣದ ಜೊತೆಗೆ ವಸೂಲು ಮಾಡಲಾಗುವುದು.

7) ಬಹಿರಂಗ ಹರಾಜು ಮಾಡುವ ವೇಳೆಯಲ್ಲಿ ಏನಾದರೂ ತಕರಾರುಗಳು ಬಂದಲ್ಲಿ ಕಾರ್ಮಿಕ ಅಧಿಕಾರಿಗಳು ಕೈಗೊಳ್ಳುವ ತೀರ್ಮಾನವೇ ಅಂತಿಮವಾಗಿರುತ್ತದೆ.

8) ಬಹಿರಂಗ ಹರಾಜನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ಮುಂದೂಡುವ ಅಥವಾ ಕರೆದಿರುವುದನ್ನು ತಿರಸ್ಕರಿಸುವ ಅಧಿಕಾರವನ್ನು ಕಾರ್ಮಿಕ ಅಧಿಕಾರಿಗಳು ದಾವಣಗೆರೆ ಇವರು ಹೊಂದಿರುತ್ತಾರೆ, ಇವರ ನಿರ್ಣಯವೇ ಅಂತಿಮ ತೀರ್ಮಾನವಾಗಿರುತ್ತದೆ.

9) ಬಹಿರಂಗ ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು ಹರಾಜು ಮಾಡಲಿರುವ ಸಾಮಗ್ರಿಗಳನ್ನು ಹೇಗಿದೆಯೋ ಹಾಗೇ ಇರುವ ಸ್ಥಿತಿಯಲ್ಲಿ ಮೇಲ್ವಿಚಾರಕರು ಕಾರ್ಮಿಕ ಕಲ್ಯಾಣ ಕೇಂದ್ರ ಲೇಬರ್ ಕಾಲೋನಿ ನಿಟ್ಟುವಳ್ಳಿ ರಸ್ತೆ ದಾವಣಗೆರೆ ಇಲ್ಲಿ ರಜಾದಿನಗಳನ್ನು ಹೊರತುಪಡಿಸಿ ಬಿಡ್ಡು ಕರೆಯುವ ದಿನಾಂಕಕ್ಕಿಂತಲೂ ಮುಂಚಿತವಾಗಿ ನೋಡಬಹುದಾಗಿರುತ್ತದೆ.

10) ಬಹಿರಂಗ ಹರಾಜು ಮುಗಿದ ನಂತರ ಯಶಸ್ವಿಯಾಗದ ಸವಾಲುದಾರರ ಠೇವಣಿಯನ್ನು ಕೂಡಲೇ ಸ್ಥಳದಲ್ಲಿ ಹಿಂದಿರುಗಿಸಲಾಗುವುದು.

ಪಿ.ಆರ್. 93 ಕಾರ್ಮಿಕ ಅಧಿಕಾರಿ, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ತುಮಕೂರು ಜಿಲ್ಲೆ, ತುಮಕೂರು**

**ಪ್ರಕಟಣೆ ಸಂಖ್ಯೆ: ಸಕೃನಿ:ತು:ಲೆಕ್ಕ-1:ಅನುಪಯುಕ್ತ ವಾಹನ:ವಿಲೇವಾರಿ:2004-05, ದಿನಾಂಕ: 10ನೇ ಫೆಬ್ರವರಿ 2005**

ಈ ಕಛೇರಿಯಲ್ಲಿರುವ ಅನುಪಯುಕ್ತ ವಾಹನ ಸಿಕೆಬಿ 147 ಜೀಪನ್ನು ದಿನಾಂಕ: 16ನೇ ಮಾರ್ಚ್ 2005 ರಂದು ಮಧ್ಯಾಹ್ನ 4.00 ಗಂಟೆಗೆ ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ತುಮಕೂರಿನಲ್ಲಿ ಮರು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.

**ಷರತ್ತುಗಳು:**

1. ಹರಾಜಿನಲ್ಲಿ ಭಾಗವಹಿಸುವವರು ರೂ.5000-00 (ಐದು ಸಾವಿರ ರೂ.ಗಳು) ಹಣವನ್ನು ಮುಂಗಡ ಠೇವಣಿಯಾಗಿ ಕಛೇರಿಯಲ್ಲಿ ಪಾವತಿಸಿ ರಸೀತಿಯನ್ನು ಪಡೆಯುವುದು.
2. ಈ ಠೇವಣಿ ಹಣವನ್ನು ಅತೀ ಹೆಚ್ಚಿನ ಬಿಡ್‌ದಾರರ ಖರೀದಿಸಿದ ಮೊಬಲಗಿಗೆ ಪರಿಗಣಿಸಿ ಉಳಿದವರಿಗೆ ಠೇವಣಿ ಹಣವನ್ನು ಸ್ಥಳದಲ್ಲೇ ಹಿಂದಿರುಗಿಸಲಾಗುವುದು.
3. ಹರಾಜಿನಲ್ಲಿ ಅತ್ಯಂತ ಹೆಚ್ಚಿನ ಬಿಡ್ಡಿಗೆ ಮಾನ್ಯ ನೀಡಲಾಗುವುದು ಹಾಗೂ ಹರಾಜನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರ ಹರಾಜು ನಡೆಸುವ ಪ್ರಾಧಿಕಾರಕ್ಕೆ ಸೇರಿರುತ್ತದೆ.
4. ಈ ಅನುಪಯುಕ್ತ ವಾಹನದ ಅತೀ ಹೆಚ್ಚಿನ ಬಿಡ್‌ದಾರ ಶೇ.50 ರಷ್ಟು ಹಣವನ್ನು ನಗದಾಗಿ ಸ್ಥಳದಲ್ಲೇ ಪಾವತಿಸಿ ರಸೀತಿ ಪಡೆಯುವುದು. ಉಳಿದ ಶೇ.50ರ ಹಣವನ್ನು ತೆರಿಗೆಯೊಂದಿಗೆ ಹರಾಜು ಸ್ಥಿರೀಕರಣ ಆದೇಶ ಬಂದ ನಂತರ 15 ದಿನಗಳೊಳಗೆ ಪಾವತಿಸಿ ವಾಹನವನ್ನು ತೆಗೆದುಕೊಂಡು ಹೋಗುವುದು.
5. ಒಂದು ವೇಳೆ ತಿಳಿಸಲಾಗಿರುವ ಅವಧಿಯೊಳಗೆ ಪೂರ್ತಿ ಹಣವನ್ನು ಪಾವತಿಸುವಲ್ಲಿ ವಿಫಲವಾದಲ್ಲಿ ಈ ವಾಹನವನ್ನು ಮರು ಹರಾಜು ಮಾಡಲಾಗುವುದು. ಇದರಿಂದ ಉಂಟಾಗಬಹುದಾದ ನಷ್ಟಗಳಿಗೆ ಬಿಡ್‌ದಾರರೇ ಹೊಣೆಯಾಗಿರುತ್ತಾರೆ.
6. ಈ ಅನುಪಯುಕ್ತ ವಾಹನದ ಬಗ್ಗೆ ಮಾಹಿತಿಯನ್ನು ರಜಾ ದಿನಗಳನ್ನು ಹೊರತುಪಡಿಸಿ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.

ಸಹಾಯಕ ಕೃಷಿ ನಿರ್ದೇಶಕರು, ತುಮಕೂರು.

**ಪ್ರಪತ್ರ 34-ಬಿ**

| ಕ್ರ. ಸಂ. | ಸರಕು ಭಂಡಾರದ ವಿವರ | ಪ್ರಮಾಣ ಅಥವಾ ತೂಕ | ಖರೀದಿಸಿದ ದಿನಾಂಕ | ಖರೀದಿಸಿದ ದರ ರೂ. | ವಿಲೇವಾರಿ ವಿಧಾನ | ವಾಹನ ಸ್ಥಿತಿ | ವಾಹನ ನಿಲುಗಡೆ ಯಾಗಿರುವ ಮತ್ತು ಬಹಿರಂಗ ಹರಾಜು ಮಾಡಲಾಗುವ ಸ್ಥಳ |
|---|---|---|---|---|---|---|---|
| 1) | ಮಹೇಂದ್ರ ಜೀಪ್ (ಡೀಸಲ್) ಮಾಡಲ್ 1986 ಸಿಕೆಬಿ.147 | ಒಂದು | 12.06.86 | 109942 | ಬಹಿರಂಗ ಹರಾಜು | ಅನುಪ-ಯುಕ್ತ | ಸ.ಕೃ.ನಿ. ಕಛೇರಿ, ತುಮಕೂರು. |

ಪಿ.ಆರ್. 99 ಸಹಾಯಕ ಕೃಷಿ ನಿರ್ದೇಶಕರು, ತುಮಕೂರು.

**ಟೆಂಡರ್ ಆಹ್ವಾನಿಸುವ ಪ್ರಾಧಿಕಾರ**

**ಡಿಜಿಪಿ ಮತ್ತು ಗೃಹರಕ್ಷಕ ದಳದ ಮಹಾ ಸಮಾದೇಷ್ಟರು ಹಾಗೂ ಪೌರರಕ್ಷಣಾ ನಿರ್ದೇಶಕರ ಕಛೇರಿ,**

**ನಂ.1, ಅಣ್ಣಾಸ್ವಾಮಿ ಮೊದಲಿಯಾರ್ ರಸ್ತೆ, ಬೆಂಗಳೂರು-560 042**

**ಟೆಂಡರ್ ಅಧಿಸೂಚನೆ ಸಂಖ್ಯೆ: ಎಸಿ(6)1/ಬಿಯುಡಿ/2004-05, ದಿನಾಂಕ: 28ನೇ ಜನವರಿ 2005**

1. 2004-05ನೇ ಸಾಲಿಗೆ ರಾಜ್ಯ ಗೃಹರಕ್ಷಕದಳದ ಆಧುನೀಕರಣ ಯೋಜನೆ ಅಡಿಯಲ್ಲಿ ಈ ಕೆಳಗೆ ನಮೂದಿಸಿದ ಸಾಮಗ್ರಿಗಳನ್ನು ಸರಬರಾಜು ಮಾಡುವ ಸಲುವಾಗಿ ನೋಂದಾವಣೆಗೊಂಡ ಉತ್ಪಾದಕರು ಮತ್ತು ಸರಬರಾಜುದಾರರಿಂದ ಮೊಹರಾದ ಟೆಂಡರ್‌ಗಳನ್ನು ದ್ವಿಪ್ರತಿಗಳಲ್ಲಿ ಆಹ್ವಾನಿಸಲಾಗಿದೆ.

| ಕ್ರಮ ಸಂಖ್ಯೆ | ಸಾಮಗ್ರಿಯ ಹೆಸರು | ಪ್ರಮಾಣ | ಅಂದಾಜು ಮೌಲ್ಯ |
|---|---|---|---|
| 1 | ಎಫ್.ಜಿ.ಹೆಲ್ಮೆಟ್ | 2700 ಸಂಖ್ಯೆ | ರೂ.5,07,600 + ತೆರಿಗೆಗಳು |
| 2 | ಅಲ್ಯುಮಿನಿಯಂ ಎಕ್ಸ್‌ಟೆನ್‌ಷನ್ ಲಾಡರ್ | 21 ಸಂಖ್ಯೆ | ರೂ.1,38,600 + ತೆರಿಗೆಗಳು |

2. ಡಿಜಿಪಿ ಮತ್ತು ಗೃಹರಕ್ಷಕ ದಳದ ಮಹಾ ಸಮಾದೇಷ್ಟರು ಹಾಗೂ ನಿರ್ದೇಶಕರು, ಪೌರರಕ್ಷಣೆ, ಬೆಂಗಳೂರು ಇವರ ಹೆಸರಿನಲ್ಲಿ ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ರೂ.200/- ಗಳಿಗೆ (ಎರಡು ನೂರು ರೂಪಾಯಿಗಳು) ಮಾತ್ರ ಪಡೆದ ಡಿ.ಡಿ. ಸಂದಾಯಿಸಿ ಕೆಲಸದ ದಿನಗಳಲ್ಲಿ ಈ ಕಛೇರಿಯಿಂದ ನಿಗದಿತ ಟೆಂಡರ್ ಫಾರಂನ್ನು ಈ ಟೆಂಡರ್ ಅಧಿಸೂಚನೆ ಪ್ರಕಟಗೊಂಡ ದಿನಾಂಕದಿಂದ 11.03.2005ರ ಸಂಜೆ 4.00 ಗಂಟೆಯವರೆಗೆ ಪಡೆಯಬಹುದಾಗಿದೆ.

3. ಟೆಂಡರಿನೊಂದಿಗೆ ಐಟಂ ಬೆಲೆಯ ಶೇಕಡಾ 1.5ರ ಮೌಲ್ಯದ ಇ.ಎಂ.ಡಿ. ಯನ್ನು ಲಗತ್ತಿಸತಕ್ಕದ್ದು.
4. ಸರಬರಾಜು ಆದೇಶ ನೀಡಿದ ದಿನಾಂಕದಿಂದ 30 ದಿನಗಳ ಕಾಲಾವಧಿಯಲ್ಲಿ ಸರಬರಾಜನ್ನು ಪೂರ್ಣಗೊಳಿಸತಕ್ಕದ್ದು.
5. ಟೆಂಡರನ್ನು ಸ್ವೀಕರಿಸಲು ಕಡೆಯ ದಿನಾಂಕ 14.03.2005ರ ಸಂಜೆ 4.00 ಗಂಟೆ.
6. ಟೆಂಡರನ್ನು ದಿನಾಂಕ: 15.03.2005 ರಂದು ಸಂಜೆ 4 ಗಂಟೆಗೆ ತೆರೆಯಲಾಗುವುದು.
7. ಯಾವುದೇ ಕಾರಣ ನೀಡದೇ ಟೆಂಡರನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾದಿರಿಸಲಾಗಿದೆ.
8. ಸ್ಪೆಸಿಫಿಕೇಶನ್:

| Sl. No. | Name of the Item | Quantity | Specification |
|---|---|---|---|
| 1 | F.G. Helmet | 2700 Nos. | Olive Green fibre Glass Helmets for Home Guards non metal-confirming to IS No.9562/1980 with amendment No.1 & 2 MASS OF COMPLETE. Helmet without peak if provided shall not exceed 1500 grams. Shall of the helmet shall be of non-metallic materials confirming to tent requirement given under clause 5 of IS 4151/1982. White metal Home Guard Emblem (as per sample displayed in this office) should be provided in front of the helmet. The letters 'HG' at a visible point inside the helmet should be impregnated. |
| 2 | Aluminium Extension Ladder | 21 Nos. | Aluminium Extension Ladder made out of Aluminium Alloy, 8' feet closed by 13' feet extendable with lock, pully, rope, rubber shoes and caps. |

**ಎನ್. ಶಿವಪ್ರಸಾದ್**

ಪಿ.ಆರ್. 100

ಡಿಜಿಪಿ ಮತ್ತು ಗೃಹರಕ್ಷಕ ದಳದ ಮಹಾ ಸಮಾದೇಷ್ಟರು
ಹಾಗೂ ಪೌರರಕ್ಷಣಾ ನಿರ್ದೇಶಕರು, ಬೆಂಗಳೂರು.

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಲಾಲ್‌ಬಾಗ್ ಸಸ್ಯತೋಟ, ಲಾಲ್‌ಬಾಗ್, ಬೆಂಗಳೂರು**

**ಸಂಕ್ಷಿಪ್ತ ಟೆಂಡರ್ ಆಹ್ವಾನ ಪ್ರಕಟಣೆ**

**ಸಂಖ್ಯೆ: ತೋಉನಿ:ಲಾಸತೋ:ಬಿಜಿಟಿ:ವಿನಿ1:68:2004-05, ದಿನಾಂಕ: 2ನೇ ಫೆಬ್ರವರಿ 2005**

ಲಾಲ್‌ಬಾಗ್ ಸಸ್ಯತೋಟದ ರಾಜಾವೃತ್ತದ ಹುಲ್ಲುಹಾಸು ಮತ್ತು ತೋಟಗಾರಿಕೆ ನಿರ್ದೇಶನಾಲಯ ಹಾಗೂ ಗ್ರಂಥಾಲಯ ಮಧ್ಯದ ಹುಲ್ಲುಹಾಸುಗಳ ಒಟ್ಟು ಸುಮಾರು 9494 ಚ.ಮೀ. ವಿಸ್ತೀರ್ಣ ಹುಲ್ಲುಹಾಸುಗಳನ್ನು ನಿರ್ಮಾಣ ಮಾಡಲು ಆದಾಯ ತೆರಿಗೆ ಮತ್ತು ಕರ್ನಾಟಕ ಮಾರಾಟ ತೆರಿಗೆ ಇಲಾಖೆಗಳಲ್ಲಿ ಅಧಿಕೃತ ನೋಂದಣಿ ಹೊಂದಿರುವ ಗುತ್ತಿಗೆದಾರರಿಂದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಆಸಕ್ತಿಯುಳ್ಳವರು ಈ ಕಛೇರಿಯಿಂದ ಹೊರಡಿಸಿರುವ ಟೆಂಡರ್ ಪ್ರಕಟಣೆಯಲ್ಲಿನ ನಿಬಂಧನೆಗಳಿಗೆ ಒಪ್ಪಿದಲ್ಲಿ ಮತ್ತು ಅದರಲ್ಲಿ ಸೂಚಿಸಿರುವ ಮಾದರಿ ಪ್ರಮಾಣದ ಕೆಲಸ / ಸರಬರಾಜುಗಳಿಗೆ ಒಪ್ಪಿದಲ್ಲಿ ಟೆಂಡರ್‌ಗಳನ್ನು ಸಲ್ಲಿಸಬಹುದು. ನಿಗದಿತ ಟೆಂಡರ್ ಫಾರಂಗಳನ್ನು ದಿನಾಂಕ: 10.03.2005 ರಿಂದ 15.03.2005 ರವರೆಗೆ ರೂ.500/- ಸಂದಾಯ ಮಾಡಿ ಪಡೆಯಬಹುದಾಗಿದೆ. ಭರ್ತಿ ಮಾಡಿದ ಟೆಂಡರ್‌ಗಳನ್ನು ದಿನಾಂಕ: 17.03.2005 ರಂದು ಮಧ್ಯಾಹ್ನ 1.30 ರೊಳಗೆ ಈ ಕಛೇರಿಗೆ ಸಲ್ಲಿಸುವುದು. ಟೆಂಡರ್‌ಗಳನ್ನು ಅದೇ ದಿನ ಸಂಜೆ 4.00 ಘಂಟೆಗೆ ಹಾಜರಿರುವ ಸಮ್ಮುಖದಲ್ಲಿ ತೆರೆಯಲಾಗುವುದು. ಹೆಚ್ಚಿನ ವಿವರಗಳಿಗೆ ಈ ಕೆಳ ಸಹಿದಾರರ ಕಛೇರಿಯಿಂದ ಪಡೆಯಬಹುದಾಗಿದೆ.

ತೋಟಗಾರಿಕೆ ಉಪ ನಿರ್ದೇಶಕರು, ಲಾಲ್‌ಬಾಗ್ ಸಸ್ಯತೋಟ,

ಪಿ.ಆರ್. 95

ಲಾಲ್‌ಬಾಗ್, ಬೆಂಗಳೂರು.

**ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ**

**ಸರ್ಕಾರಿ ಮುದ್ರಣಾಲಯ, ನಂ.6/ಇ, 1ನೇ ಅಡ್ಡರಸ್ತೆ, ಕೆ.ಐ.ಎ.ಡಿ.ಬಿ. ಪೀಣ್ಯ 1ನೇ ಹಂತ, ತುಮಕೂರು ರಸ್ತೆ, ಬೆಂಗಳೂರು-560 058**

**ಟೆಂಡರ್ ಪ್ರಕಟಣೆ ಸಂಖ್ಯೆ: ಪಿ ಖರೀದಿ-2142:2004-05, ದಿನಾಂಕ: 18ನೇ ಫೆಬ್ರವರಿ 2005**

2005-2006ನೇ ಸಾಲಿಗೆ ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು, ಸರ್ಕಾರಿ ಹೊರವಲಯ ಮುದ್ರಣಾಲಯ, ಮೈಸೂರು ರಸ್ತೆ, ಬೆಂಗಳೂರು, ಸರ್ಕಾರಿ ಮುದ್ರಣಾಲಯ, ವಿಧಾನಸೌಧ ಘಟಕ, ಬೆಂಗಳೂರು, ಸರ್ಕಾರಿ ಮುದ್ರಣಾಲಯ, ಪೀಣ್ಯ ಶೆಡ್, ಬೆಂಗಳೂರು ಮತ್ತು ಸರ್ಕಾರಿ ಪಠ್ಯ ಪುಸ್ತಕ ಮುದ್ರಣಾಲಯ ಸರಸ್ವತಿಪುರಂ, ಮೈಸೂರು-9 ಹಾಗೂ ಶಾಖಾ ಮುದ್ರಣಾಲಯಗಳಾದ ಧಾರವಾಡ, ಗುಲ್ಬರ್ಗಾ, ಮಡಿಕೇರಿ, ತುಮಕೂರು, ಕೋಲಾರ, ಮಂಗಳೂರು ಮತ್ತು ಶಿವಮೊಗ್ಗ ಈ ಸ್ಥಳಗಳಲ್ಲಿ ದಿನಾಂಕ: 01.04.2005 ರಿಂದ 31.03.2006ರ ವರೆಗೆ ಶೇಖರಣೆಯಾಗುವ

(1) ಬಿಳಿಜಲ್ಲಿ ಕಟ್ ಪೀಸ್ ಪೇಪರ್, ವೇಸ್ಟ್ ಪೇಪರ್ ಮತ್ತು ಆಯಿಲ್ಡ್ ಸ್ಲೀಪಿಂಗ್ಸ್ ಹಾಗೂ ಬಫ್ ಜಲ್ಲಿ ಕಟ್ ಪೀಸ್ ಪೇಪರ್

(2) ರೀಲ್ ಪೇಪರ್ ವೇಸ್ಟೇಜ್‌ಗಳು / ಸಾಲ್ವೇಜುಗಳು

(3) ಹಳೆಯ ಗೆಜೆಟ್ ಪ್ರತಿಗಳು

(4) ಹಳೆಯ ನಿರುಪಯುಕ್ತ ಪುಸ್ತಕಗಳು

(5) ಹಳೆಯ ನಿರುಪಯುಕ್ತ ನಮೂನೆಗಳು

ಇವುಗಳನ್ನು ವಿಲೇವಾರಿ ಮಾಡಲು ಪೇಪರ್ ಮಿಲ್ಲುಗಳಿಂದ ಮತ್ತು ಕಾರ್ಡ್ ಬೋರ್ಡ್ ತಯಾರಿಕಾ ಸಂಸ್ಥೆಗಳಿಂದ ದಿನಾಂಕ: 19.03.2005ರ ಸಂಜೆ 4.30ರ ವರೆಗೆ ಮೊಹರಾದ ಟೆಂಡರನ್ನು ಕರೆಯಲಾಗಿದೆ. ಟೆಂಡರ್‌ದಾರರು ಈ ಕೆಳಕಂಡ ಷರತ್ತು ಮತ್ತು ಅರ್ಹತೆಯ ಆಧಾರದ ಮೇಲೆ ಲಕೋಟೆ-I ಮತ್ತು ಲಕೋಟೆ-II ರಲ್ಲಿ ಮೊಹರಾದ ಟೆಂಡರನ್ನು ಸಲ್ಲಿಸಬೇಕಾಗುತ್ತದೆ. ಇದಕ್ಕೆ ಸಂಬಂಧಿಸಿದ ಷರತ್ತು ಮತ್ತು ನಿಬಂಧನೆಗಳು ಈ ರೀತಿಯಾಗಿರುತ್ತದೆ.

**ಷರತ್ತುಗಳು ಮತ್ತು ನಿಬಂಧನೆಗಳು**

1. ಟೆಂಡರ್‌ದಾರರು ಕರ್ನಾಟಕ ಮಾರಾಟ ತೆರಿಗೆಯ ನೋಂದಾಯಿತ ದೃಢೀಕರಣ ಪ್ರತಿ ಹಾಗೂ ನಮೂನೆ ಸಂಖ್ಯೆ 3 ರಲ್ಲಿ ಡಿಸೆಂಬರ್ 2004ರ ನವೀಕರಣ ಪ್ರತಿ ಮಾಸಿಕ ತೆರಿಗೆ ಸಂದಾಯ ಪ್ರತಿಗಳನ್ನು ಮತ್ತು ವಾರ್ಷಿಕ ವರದಿಯೊಂದಿಗೆ ಆದಾಯ ತೆರಿಗೆ ಅಧಿಕಾರಿಗಳಿಂದ ದೃಢೀಕರಿಸಿದ ಬಗ್ಗೆ ಪ್ರಮಾಣ ಪತ್ರವನ್ನು ಲಗತ್ತಿಸಿರಬೇಕು.
2. ಟೆಂಡರ್‌ದಾರರು ಈ ಹಿಂದಿನ ಮೂರು ವರ್ಷದ 2002-2003, 2003-2004 ಮತ್ತು 2004-2005ರ ಅವಧಿಯಲ್ಲಿ ಆದಾಯ ತೆರಿಗೆಯನ್ನು ಪಾವತಿ ಮಾಡಿರುವ ಬಗ್ಗೆ ಸ್ವೀಕೃತಿ ಪ್ರತಿಯನ್ನು ಲಗತ್ತಿಸಿರಬೇಕು.
3. ಟೆಂಡರ್‌ದಾರರು ಕಳೆದ ಮೂರು ವರ್ಷಗಳಲ್ಲಿ ಲಾಭ ಮತ್ತು ನಷ್ಟಗಳ ಬಗ್ಗೆ ಲೆಕ್ಕ ಪರಿಶೋಧಕರಿಂದ ದೃಢೀಕರಣ ಪತ್ರ ಹಾಗೂ 5 ಲಕ್ಷ ರೂಪಾಯಿಗಳಷ್ಟು ವಾರ್ಷಿಕ ವ್ಯವಹಾರ ಮಾಡಿರುವುದರ ಬಗ್ಗೆ ಚಾರ್ಟರ್ಡ್ ಅಕೌಂಟೆಂಟರವರಿಂದ ದೃಢೀಕರಣ ಪತ್ರವನ್ನು ಪಡೆದು ಲಗತ್ತಿಸಿರಬೇಕು.

**ಲಕೋಟೆ-2ರ ಷರತ್ತುಗಳು ಮತ್ತು ನಿಬಂಧನೆಗಳು**

1. ಟೆಂಡರ್‌ದಾರರು ಮೇಲಿನ ಐಟಂಗಳಲ್ಲಿ ಬಿಳಿಜಲ್ಲಿ ಕಟ್ ಪೀಸ್ ಪೇಪರ್, ವೇಸ್ಟ್ ಪೇಪರ್ ಮತ್ತು ಆಯಿಲ್ಡ್ ಸ್ಲೀಪಿಂಗ್ಸ್ ಹಾಗೂ ಬಫ್ ಜಲ್ಲಿ ಕಟ್‌ಪೀಸ್ ಪೇಪರ್‌ಗಳಿಗೆ ಮಾತ್ರ ಸರಾಸರಿ ಆಧಾರದ ಮೇಲೆ ಪ್ರತಿ ಟನ್ನಿಗೆ ಒಂದೇ ದರ ಸೂಚಿಸಬೇಕು. ಉಳಿದ ಐಟಂಗಳಾದ ರೀಲ್ ಪೇಪರ್ ವೇಸ್ಟೇಜ್ / ಸಾಲ್ವೇಜುಗಳು ಹಳೆಯ ಗೆಜೆಟ್ ಪ್ರತಿಗಳು, ಮತ್ತು ಹಳೆಯ ನಿರುಪಯುಕ್ತ ನಮೂನೆಗಳು ಮತ್ತು ಹಳೆಯ ನಿರುಪಯುಕ್ತ ಪುಸ್ತಕಗಳಿಗೆ ಬೇರೆ ಬೇರೆಯಾಗಿ ಪ್ರತಿ ಟನ್ನಿಗೆ ದರಗಳನ್ನು ಪ್ರತ್ಯೇಕವಾಗಿ ಸೂಚಿಸಬೇಕು. ದರಗಳನ್ನು ಸೂಚಿಸುವಾಗ ಅನ್ವಯಿಸುವ ತೆರಿಗೆಗಳನ್ನು ಪ್ರತ್ಯೇಕವಾಗಿ ಸೂಚಿಸಬೇಕು ಮತ್ತು ಸರ್ಕಾರಿ ಪಠ್ಯಪುಸ್ತಕ ಮುದ್ರಣಾಲಯ, ಮೈಸೂರು ಹಾಗೂ ಶಾಖಾ ಮುದ್ರಣಾಲಯಗಳಾದ, ಧಾರವಾಡ, ಗುಲ್ಬರ್ಗಾ, ಮಡಿಕೇರಿ, ತುಮಕೂರು, ಕೋಲಾರ, ಮಂಗಳೂರು ಮತ್ತು ಶಿವಮೊಗ್ಗ ಈ ಸ್ಥಳಗಳಿಗೆ ಪ್ರತ್ಯೇಕ ದರಗಳನ್ನು ಸೂಚಿಸಬಹುದಾಗಿದೆ.
2. ಟೆಂಡರ್‌ದಾರರು ತಮ್ಮ ಮೊಹರಾದ ಟೆಂಡರ್ ಲಕೋಟೆ 1 ರಲ್ಲಿ ರೂ.2,60,000/- (ಮೊಬಲಗು ಎರಡು ಲಕ್ಷದ ಅರವತ್ತು ಸಾವಿರ ರೂಪಾಯಿಗಳು ಮಾತ್ರ) ಬಡ್ಡಿ ರಹಿತ ಭದ್ರತಾ ಠೇವಣಿಯನ್ನು ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು ಇವರಿಗೆ ಸಂದಾಯವಾಗುವಂತೆ ಪಡೆದು ಲಗತ್ತಿಸಿರಬೇಕು. ನಗದು ರೂಪದಲ್ಲಿ ಹಣವನ್ನು ಸ್ವೀಕರಿಸುವುದಿಲ್ಲ. ಡಿಮ್ಯಾಂಡ್ ಡ್ರಾಫ್ಟ್ ಲಗತ್ತಿಸದ ಟೆಂಡರನ್ನು ತಿರಸ್ಕರಿಸಲಾಗುವುದು ಮುದ್ರಣಾಲಯವಾರು ಭದ್ರತಾ ಠೇವಣಿ ವಿವರ ಇಂತಿದೆ:

| | | |
|---|---|---|
| 1) | ಸರ್ಕಾರಿ ಕೇಂದ್ರ ಮುದ್ರಣಾಲಯ, ಪೀಣ್ಯ, ಬೆಂಗಳೂರು<br>ಸರ್ಕಾರಿ ಮುದ್ರಣಾಲಯ, ವಿಧಾನಸೌಧ ಘಟಕ, ಬೆಂಗಳೂರು<br>ಸರ್ಕಾರಿ ಮುದ್ರಣಾಲಯ, ಪೀಣ್ಯ ಶೆಡ್, ಬೆಂಗಳೂರು | ರೂ. 40,000 |
| 2) | ಸರ್ಕಾರಿ ಹೊರವಲಯ ಮುದ್ರಣಾಲಯ, ಮೈಸೂರು ರಸ್ತೆ, ಬೆಂಗಳೂರು | ರೂ. 30,000 |
| 3) | ಸರ್ಕಾರಿ ಪಠ್ಯಪುಸ್ತಕ ಮುದ್ರಣಾಲಯ, ಸರಸ್ವತಿಪುರಂ, ಮೈಸೂರು | ರೂ. 30,000 |
| 4) | ಸರ್ಕಾರಿ ಶಾಖಾ ಮುದ್ರಣಾಲಯಗಳಾದ ತುಮಕೂರು | ರೂ. 80,000 |
| 5) | ಸರ್ಕಾರಿ ಶಾಖಾ ಮುದ್ರಣಾಲಯಗಳಾದ ಧಾರವಾಡ ಮತ್ತು ಗುಲ್ಬರ್ಗಾ ತಲಾ | ರೂ. 20,000 x 2=40,000 |
| 6) | ಸರ್ಕಾರಿ ಶಾಖಾ ಮುದ್ರಣಾಲಯಗಳಾದ ಮಡಿಕೇರಿ, ಮಂಗಳೂರು, ಕೋಲಾರ ಮತ್ತು ಶಿವಮೊಗ್ಗ ತಲಾ | ರೂ. 10,000 x 4=40,000 |

3. ಟೆಂಡರಿನಲ್ಲಿ ಸೂಚಿಸಿರುವ ದರಗಳನ್ನು ನಿರ್ದೇಶಕರು ಯಾವುದೇ ಕಾರಣಗಳನ್ನು ನೀಡದೆ ತಿರಸ್ಕರಿಸಬಹುದಾಗಿದೆ ಹಾಗೂ ಈ ವಿಚಾರದಲ್ಲಿ ಉಂಟಾಗುವ ಯಾವುದೇ ವಿವಾದಗಳಲ್ಲಿ ಈ ಇಲಾಖೆಯ ನಿರ್ದೇಶಕರದೇ ಅಂತಿಮ ತೀರ್ಮಾನವಾಗಿರುತ್ತದೆ. ಮತ್ತು ಟೆಂಡರನ್ನು ಒಪ್ಪುವ ಅಥವಾ ತಿರಸ್ಕರಿಸುವ ಅಧಿಕಾರವು ಈ ಇಲಾಖೆಯ ನಿರ್ದೇಶಕರದ್ದಾಗಿರುತ್ತದೆ.

4. ಟೆಂಡರ್‌ದಾರರು ಮೊಹರಾದ ಟೆಂಡರ್ ಲಕೋಟೆಗಳ ಮೇಲೆ ಬಿಳಿ ಜಲ್ಲಿ ಕಟ್ ಪೀಸ್ ಪೇಪರ್, ವೇಸ್ಟ್ ಪೇಪರ್ ಮತ್ತು ಆಯಿಲ್ಡ್ ಸ್ಟ್ರಿಪಿಂಗ್ಸ್ ರೀಲ್ ಪೇಪರ್ ವೇಸ್ಟೇಜ್ ಹಳೆಯ ಗೆಜೆಟ್ ಪ್ರತಿಗಳು ಮತ್ತು ನಿರುಪಯುಕ್ತ ನಮೂನೆಗಳು ಇತ್ಯಾದಿಗಳ ಖರೀದಿಗಾಗಿ ಎಂಬ ಶೀರ್ಷಿಕೆ ಬರಹಗಳೊಂದಿಗೆ ಟೆಂಡರ್ ಲಕೋಟೆ I ಮತ್ತು II ಅನ್ನು ದಿನಾಂಕ: 19.03.2005ರ ಸಂಜೆ 4.30ರ ಒಳಗೆ ನಿರ್ದೇಶಕರು, ಮುದ್ರಣ, ಲೇಖನ, ಸಾಮಗ್ರಿ ಪ್ರಕಟಣೆಗಳ ಕಾರ್ಯಾಲಯ, ಸರ್ಕಾರಿ ಮುದ್ರಣಾಲಯ, ನಂ.6/೫, 1ನೇ ಅಡ್ಡರಸ್ತೆ, ಕೆ.ಐ.ಎ.ಡಿ.ಬಿ., ಪೀಣ್ಯ 1ನೇ ಹಂತ, ತುಮಕೂರು ರಸ್ತೆ, ಬೆಂಗಳೂರು-560 058 ಇಲ್ಲಿಗೆ ತಲುಪುವಂತೆ ಕಳುಹಿಸಿಕೊಡತಕ್ಕದ್ದು.
5. ಟೆಂಡರಿನ ಲಕೋಟೆ I ಅನ್ನು ದಿನಾಂಕ: 21.03.2005ರ ಮಧ್ಯಾಹ್ನ 12 ಗಂಟೆಗೆ ನಿರ್ದೇಶಕರು, ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು ಇಲ್ಲಿ ತೆರೆಯಲಾಗುವುದು. ಮೊಹರಾದ ಟೆಂಡರನ್ನು ತೆರೆಯುವಾಗ ಹಾಜರಿರಲು ಇಚ್ಛಿಸುವ ಟೆಂಡರುದಾರರು ಸಂಬಂಧಪಟ್ಟ ಸಂಸ್ಥೆಯ ಗುರುತು ಪತ್ರದೊಂದಿಗೆ ಹಾಜರಾಗಬಹುದು.
6. ಈ ಮೇಲಿನ ಐಟಂಗಳನ್ನು ವೀಕ್ಷಿಸುವಂತಹವರು ಕೆಲಸದ ದಿನಗಳಲ್ಲಿ ಆಯಾ ಮುದ್ರಣಾಲಯಗಳ ಅಧಿಕಾರಿಗಳ ಅಪ್ಪಣೆ ಪಡೆದು ನಂತರ ಈ ಇಲಾಖೆಯ ಮುಖ್ಯ ಸಮಯಪಾಲಕರ ಸಮ್ಮುಖದಲ್ಲಿ ವೀಕ್ಷಿಸಬಹುದಾಗಿದೆ.
7. ಈ ಮೇಲ್ಕಂಡ ಐಟಂಗಳನ್ನು "ವೇಬ್ರಿಡ್ಜ್" ನಲ್ಲಿ ಮಾತ್ರ ತೂಕ ಹಾಕಿಸಿ ಕೊಡಲಾಗುವುದು.
8. ಲಕೋಟೆ-Iನ್ನು ಪೂರ್ಣವಾಗಿ ಪರಿಶೀಲಿಸಿದ ನಂತರ ದಿನಾಂಕ: 22.03.2005 ರಂದು ಮಧ್ಯಾಹ್ನ 12 ಘಂಟೆಗೆ ಲಕೋಟೆ-IIನ್ನು ತೆರೆಯಲಾಗುವುದು.
9. ಪಾರದರ್ಶಕ ನಿಯಮಗಳ ಪ್ರಕಾರ ಟೆಂಡರ್‌ದಾರರು ಸಲ್ಲಿಸಿರುವ ಮೊಹರಾದ ಲಕೋಟೆಯನ್ನು ತೆರೆದಾಗ ಲಕೋಟೆ Iರ ಷರತ್ತುಗಳು ಮತ್ತು ನಿಬಂಧನೆಗಳ ಪೂರ್ಣ ಮಾಹಿತಿಯನ್ನು ಒದಗಿಸಿದ ಟೆಂಡರ್‌ದಾರರ ಲಕೋಟೆ IIನ್ನು ಮಾತ್ರ ತೆರೆಯಲಾಗುವುದು. ಪೂರ್ಣವಾದ ಮಾಹಿತಿಯನ್ನು ಒದಗಿಸದ ಟೆಂಡರನ್ನು ಯಾವುದೇ ಕಾರಣವನ್ನು ನೀಡದೆ ತಿರಸ್ಕರಿಸಲಾಗುವುದು.
10. ಈ ಹಿಂದೆ ಈ ಇಲಾಖೆಯಿಂದ ಮೇಲ್ಕಂಡ ಐಟಂಗಳನ್ನು ಸರಿಯಾಗಿ ವಿಲೇವಾರಿ ಮಾಡದ ಹಾಗೂ ನಿಯಮಾನುಸಾರ ಕ್ರಮಬದ್ಧವಾಗಿ ವ್ಯವಹರಿಸದ ಸಂಸ್ಥೆಗಳು ಮತ್ತು ಈಗಾಗಲೇ ಇದರ ಸಂಬಂಧದಲ್ಲಿ ಭದ್ರತಾ ಠೇವಣಿ ಹಣವನ್ನು ಈ ಇಲಾಖೆಯಿಂದ ಮುಟ್ಟುಗೋಲು ಹಾಕಿಕೊಂಡಿರುವ ಸಂಸ್ಥೆಗಳು ಟೆಂಡರಿನಲ್ಲಿ ಭಾಗವಹಿಸುವಂತಿಲ್ಲ. ಒಂದು ವೇಳೆ ಭಾಗವಹಿಸಿದಲ್ಲಿ ಸದರಿಯವರ ಭದ್ರತಾ ಠೇವಣಿ ಹಣವನ್ನು ಯಾವುದೇ ಸೂಚನೆ ನೀಡದೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
11. ಹೆಚ್ಚಿನ ದರಗಳನ್ನು ಸೂಚಿಸಿ ಈ ದರಗಳನ್ನು ಈ ಇಲಾಖೆಯಲ್ಲಿ ಒಪ್ಪಿದ ನಂತರ ಟೆಂಡರ್‌ದಾರರು ತಮ್ಮದೇ ಹೊಣೆಗಾರಿಕೆಯಲ್ಲಿ ಬಿಳಿ ಜಲ್ಲಿ ಕಟ್ ಪೀಸ್ ಪೇಪರ್, ವೇಸ್ಟ್ ಪೇಪರ್ ಮತ್ತು ಆಯಿಲ್ಡ್ ಸ್ಟ್ರಿಪಿಂಗ್ಸ್ ಹಾಗೂ ಬಫ್ ಜಲ್ಲಿ ಕಟ್ ಪೀಸ್ ಪೇಪರ್, ರೀಲ್ ಪೇಪರ್ ವೇಸ್ಟೇಜ್, ಹಳೆಯ ಗೆಜೆಟ್ ಪ್ರತಿಗಳು, ನಿರುಪಯುಕ್ತ ಹಳೆಯ ನಮೂನೆಗಳು ಮತ್ತು ಹಳೆಯ ಪುಸ್ತಕಗಳನ್ನು ಬೇರೆ, ಬೇರೆಯಾಗಿ ವಿಂಗಡಿಸಿ ಬೇರೆ, ಬೇರೆಯಾಗಿಯೇ ಚೀಲ/ಮೂಟೆಗಳನ್ನು ಮಾಡಬೇಕು ಈ ರೀತಿ ಚೀಲ/ಮೂಟೆಗಳನ್ನು ಮಾಡುವಾಗ ಮೇಲ್ಕಂಡ ಐಟಂಗಳ ಜೊತೆಯಲ್ಲಿ ಒಳ್ಳೆಯ ಉಪಯುಕ್ತ ಪೇಪರಾಗಲೀ ಅಥವಾ ಇನ್ನಾವುದೇ ಮುದ್ರಣ ವಸ್ತುಗಳು ಬೇಲುಗಳು/ಮೂಟೆಗಳಲ್ಲಿ ಸೇರದಂತೆ ಅತಿ ಎಚ್ಚರಿಕೆಯಿಂದ ಬೇಲು/ಮೂಟೆ ಮಾಡಬೇಕು ಮತ್ತು ಮೇಲಿನ ಐಟಂಗಳನ್ನು ವಾರಕ್ಕೊಮ್ಮೆ ಅಥವಾ ಒಂದು ಲೋಡು ಶೇಖರಣೆಯಾದ ಕೂಡಲೇ ಒಂದು ದಿನ ಮುಂಚಿತವಾಗಿ ಮುಂಗಡ ಹಣ ಅಥವಾ ಡಿ.ಡಿ.ಯನ್ನು ನೀಡಿ ವಿಲೇವಾರಿ ಮಾಡಬೇಕು. ಇದಕ್ಕೆ ತಪ್ಪಿದಲ್ಲಿ ನಿಮ್ಮದೆ ಹೊಣೆಗಾರಿಕೆಯಲ್ಲಿ ಇತರೆ ವಿಧಾನಗಳ ಮೂಲಕ ವಿಲೇವಾರಿ ಮಾಡಲಾಗುವುದು. ಮತ್ತು ಇವರ ಭದ್ರತಾ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆ ಸಂಸ್ಥೆಯ ಹೆಸರನ್ನು ಈ ಇಲಾಖೆಯ ಕಪ್ಪು ಪಟ್ಟಿಯಲ್ಲಿ ಸೇರಿಸಲಾಗುವುದು.
12. ಅತಿ ಹೆಚ್ಚಿನ ದರಗಳನ್ನು ನೀಡಿದ ಟೆಂಡರನ್ನು ಈ ಇಲಾಖೆಯಲ್ಲಿ ಒಪ್ಪಿದ ನಂತರ ಟೆಂಡರ್‌ದಾರರು ಮುದ್ರಣಾಲಯವಾರು ರೂ.200/- (ಎರಡು ನೂರು ರೂಪಾಯಿಗಳು ಮಾತ್ರ) ಛಾಪಾ ಕಾಗದದಲ್ಲಿ ದರಗಳು ಮತ್ತು ನಿಬಂಧನೆಗಳ ಬಗ್ಗೆ ಈ ಇಲಾಖೆಯೊಂದಿಗೆ ದರ ಕರಾರು ಮಾಡಿಕೊಳ್ಳತಕ್ಕದ್ದು, ಹೆಚ್ಚಿನ ಮಾಹಿತಿಯನ್ನು ಈ ಕಛೇರಿಯ ಕೆಲಸದ ದಿನದಂದು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದಾಗಿದೆ.
13. ಟೆಂಡರ್‌ದಾರರು ತಮ್ಮ ದರ ಪಟ್ಟಿಯಲ್ಲಿ ದರಗಳನ್ನು ಬೆರಳಚ್ಚು ಮಾಡಿಸಿದ ಟೆಂಡರನ್ನು ಸಲ್ಲಿಸಬೇಕು.

ಪಿ.ಆರ್. 101 ನಿರ್ದೇಶಕರು, ಸರ್ಕಾರಿ ಮುದ್ರಣಾಲಯ, ಬೆಂಗಳೂರು.

**ಎಕ್ಸಿಕ್ಯೂಟಿವ್ ಇಂಜನಿಯರ್‌ರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ತುಮಕೂರು**

**ಟೆಂಡರ್ ಪ್ರಕಟಣೆ (ಎರಡು ಲಕೋಟೆ ಬಿಡ್ ಪದ್ಧತಿಯಲ್ಲಿ)**

**ಸಂಖ್ಯೆ: ೫೫/ಸನೀವಿ/ತು/ಸ.ಅ-1/2004-05, ದಿನಾಂಕ: 17ನೇ ಜನವರಿ 2005**

ಕರ್ನಾಟಕ ರಾಜ್ಯದ ರಾಜ್ಯಪಾಲರ ಪರವಾಗಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳ ಪಾರದರ್ಶಕತೆ ಅಧಿನಿಯಮ 2000 ರನ್ವಯ ಈ ಕೆಳಗಿನ ಷೆಡ್ಯೂಲ್‌ನಲ್ಲಿ ನಮೂದಾಗಿರುವ ಕಾಮಗಾರಿಗೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಿರುವ ಒಂದನೇ ದರ್ಜೆಯ ಅರ್ಹ ಗುತ್ತಿಗೆದಾರರಿಂದ ಎರಡು ಲಕೋಟೆ ಬಿಡ್ ಪದ್ಧತಿಯಲ್ಲಿ ನಿಗದಿತ ನಮೂನೆಯಲ್ಲಿ ಐಟಂವಾರು ಟೆಂಡರನ್ನು ದ್ವಿಪ್ರತಿಗಳಲ್ಲಿ ಆಹ್ವಾನಿಸಲಾಗಿದೆ. ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್‌ಗಳನ್ನು ಪ್ರತ್ಯೇಕ ಲಕೋಟೆಗಳಲ್ಲಿ ಮೊಹರು ಮಾಡಿ ನಂತರ ಎರಡನ್ನು ಒಟ್ಟಿಗೆ ಒಂದೇ ಲಕೋಟೆಯಲ್ಲಿ ಮೊಹರು ಮಾಡಿ, ಲಕೋಟೆಗಳ ಮೇಲೆ ಕೆಲಸದ ಹೆಸರನ್ನು ಬರೆದು ಗುತ್ತಿಗೆದಾರರ ಪೂರ್ಣ ವಿಳಾಸದೊಂದಿಗೆ ಸಲ್ಲಿಸತಕ್ಕದ್ದು. ಎಕ್ಸಿಕ್ಯೂಟಿವ್ ಇಂಜನಿಯರ್, ಸಣ್ಣ ನೀರಾವರಿ ವಿಭಾಗ, ತುಮಕೂರು ಕಛೇರಿಯಲ್ಲಿ ಪೂರ್ಣಗೊಂಡ ಟೆಂಡರುಗಳನ್ನು ದಿನಾಂಕ: 10.3.2005 ರಂದು ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು- ಖಾಲಿ ಟೆಂಡರು ಫಾರಂ ಪಡೆಯಲು ಸಲ್ಲಿಸಿದ ಮನವಿ ಪತ್ರವನ್ನು ಪರಿಶೀಲಿಸಿದ ನಂತರ ನಿಗದಿತ ಟೆಂಡರ್ ಫಾರಂ ಬೆಲೆಯನ್ನು ಪಡೆದು ಮುಂದೆ ತಿಳಿಸಿರುವ ದಿನಾಂಕದೊಳಗೆ ಕಛೇರಿ ವೇಳೆಯಲ್ಲಿ ಮನವಿಯನ್ನು ಸ್ವೀಕರಿಸಲಾಗುವುದು. ಹೆಚ್ಚಿನ ವಿವರಗಳಿಗೆ ಈ ಕೆಳಗೆ ಸಹಿ ಮಾಡಿರುವವರ ಕಛೇರಿಯಿಂದ ಕಛೇರಿಯ ವೇಳೆಯಲ್ಲಿ ಪಡೆಯಬಹುದೆಂದು ತಿಳಿಸಲಾಗಿದೆ.

| | | |
|---|---|---|
| 1) | ಖಾಲಿ ಟೆಂಡರು ಷೆಡ್ಯೂಲಿಗಾಗಿ ಮನವಿ ಸಲ್ಲಿಸಲು ಕಡೆಯ ದಿನಾಂಕ | 25.2.2005ರ ಸಂಜೆ 5.30 ರೊಳಗೆ |
| 2) | ಅರ್ಹ ಗುತ್ತಿಗೆದಾರರಿಗೆ ಖಾಲಿ ಟೆಂಡರು ಷೆಡ್ಯೂಲನ್ನು ಒದಗಿಸುವ ದಿನಾಂಕ | 5.3.2005ರ ಸಂಜೆ 5.30 ರೊಳಗೆ |
| 3) | ಪೂರ್ಣಗೊಂಡ ಟೆಂಡರನ್ನು ಸ್ವೀಕರಿಸುವ ದಿನಾಂಕ (ತಾಂತ್ರಿಕ ಬಿಡ್ಡು ಮತ್ತು ಆರ್ಥಿಕ ಬಿಡ್ಡುಗಳನ್ನೊಳಗೊಂಡಂತೆ) | 10.3.2005 ರಂದು ಸಂಜೆ 4.00 ಗಂಟೆಯೊಳಗೆ |

ಸಾಧ್ಯವಾದಲ್ಲಿ ದಿನಾಂಕ: 10.3.2005 ರಂದೇ ಸಂಜೆ 4.30ರ ನಂತರ ಗುತ್ತಿಗೆದಾರರಿಂದ ಪಡೆದ ತಾಂತ್ರಿಕ ಬಿಡ್ಡಿನ ಲಕೋಟೆಗಳನ್ನು ತೆರೆಯಲಾಗುವುದು.

ಮೇಲೆ ತಿಳಿಸಿರುವ ದಿನಾಂಕಗಳನ್ನು ಸಾರ್ವಜನಿಕ ರಜೆ ಎಂದು ಘೋಷಿಸಲ್ಪಟ್ಟಲ್ಲಿ ಆ ದಿನಗಳ ಮುಂದಿನ ದಿನಗಳಲ್ಲಿ ಆಯಾ ಕಾರ್ಯಕ್ರಮವನ್ನು ನಡೆಸಲಾಗುವುದು.

**ಷೆಡ್ಯೂಲ್**

| ಕೆಲಸದ ಹೆಸರು | ಟೆಂಡರಿಗಿಟ್ಟ ಕಾಮಗಾರಿಯ ಮೊತ್ತ ಲಕ್ಷ ರೂ.ಗಳಲ್ಲಿ | ಇ.ಎಂ.ಡಿ. ರೂ.ಗಳಲ್ಲಿ | ಖಾಲಿ ಟೆಂಡರು ಡಾಕ್ಯೂಮೆಂಟಿನ ಬೆಲೆ ಹಿಂದಿರುಗಿಸಲಾಗುವುದಿಲ್ಲ ರೂ.ಗಳಲ್ಲಿ | ಗುತ್ತಿಗೆದಾರರ ದರ್ಜೆ | ಕಾಮಗಾರಿ ಪೂರ್ಣಗೊಳಿಸಲು ನಿಗದಿಪಡಿಸಿರುವ ಕಾಲಾವಧಿ |
|---|---|---|---|---|---|
| ತುಮಕೂರು ಜಿಲ್ಲೆ ಕುಣಿಗಲ್ ತಾ: ದೀಪಾಂಬುಧಿ ಕೆರೆಯ ಕೋಡಿಯ ಪುನರ್ ನಿರ್ಮಾಣ | 71.00 | 71,000-00 | 5,000 + ತೆರಿಗೆ | 1ನೇ ದರ್ಜೆ ಗುತ್ತಿಗೆ ದಾರರು | 8 ತಿಂಗಳು ಮಳೆಗಾಲ ಬಿಟ್ಟು |

**ನಿಬಂಧನೆಗಳು:**

1) ಗುತ್ತಿಗೆದಾರರು ಖಾಲಿ ಟೆಂಡರು ಡಾಕ್ಯೂಮೆಂಟಿಗೆ ಅರ್ಜಿ ಸಲ್ಲಿಸುವ ವೇಳೆ ಸಂಬಂಧಪಟ್ಟ ಅಧಿಕಾರಿಗಳಿಂದ ನೋಂದಣಿ ಪಡೆದಿರುವ ಮೂಲ ಪ್ರತಿಯನ್ನು ತೋರಿಸುವುದು ಹಾಗೂ ಕ್ರೋಢೀಕರಿಸಿದ ಒಂದು ಪ್ರತಿಯನ್ನು ಅರ್ಜಿ ಜೊತೆ ಲಗತ್ತಿಸುವುದು.
2) ಗುತ್ತಿಗೆದಾರರು ರಾಜ್ಯ ಮಾರಾಟ ತೆರಿಗೆಯಲ್ಲಿ ನೋಂದಣಿ ಮಾಡಿಸಿರುವ ಬಗ್ಗೆ ನೋಂದಣಿ ಪತ್ರದ ಪ್ರತಿ ಹಾಗೂ ತೀರುವಳಿ ಪತ್ರದ ಪ್ರತಿ, ಆದಾಯ ತೆರಿಗೆ ತೀರುವಳಿ ಪತ್ರದ ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸತಕ್ಕದ್ದು.
3) ಇಡಿಗಂಟನ್ನು ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ತುಮಕೂರು ಇವರ ಹೆಸರಿಗೆ ಪಡೆದ ಡಿಮ್ಯಾಂಡ್ ಡ್ರಾಫ್ಟ್ / ನಿಶ್ಚಿತ ಠೇವಣಿ ರಶೀತಿ / ಪೇ ಆರ್ಡರ್ / ಪ್ಲೆಡ್ಜ್ ಮಾಡಿಸಿರುವ ರಾಷ್ಟ್ರೀಯ ಉಳಿತಾಯ ಪತ್ರಗಳನ್ನು ಒದಗಿಸುವುದು. ಇದಕ್ಕೆ ತಪ್ಪಿದವರ ಟೆಂಡರನ್ನು ತಿರಸ್ಕರಿಸಲಾಗುವುದು.
4) ಮೇಲಿನ ಕಾಮಗಾರಿಯನ್ನು ನಿರ್ವಹಿಸಲು ಈ ಹಿಂದಿನ 5 ವರ್ಷಗಳ ಅವಧಿಯಲ್ಲಿ ಮೇಲೆ ಟೆಂಡರ್ ಕರೆಯಲಾಗಿರುವ ಕಾಮಗಾರಿಯ ಟೆಂಡರಿಗಿಟ್ಟಿರುವ ಒಟ್ಟು ಮೊತ್ತದ ಶೇಕಡ 30 ರಷ್ಟಕ್ಕಿಂತ ಹೆಚ್ಚಾಗಿರುವ ಮೊತ್ತದ ಕಾಮಗಾರಿಯನ್ನು ನಿರ್ವಹಿಸಿ ಪೂರ್ಣಗೊಳಿಸಿರುವ ಗುತ್ತಿಗೆದಾರರು ಮಾತ್ರ ಪ್ರಸ್ತುತ ಪ್ರಕಟಣೆ ಹೊರಡಿಸಲಾಗಿರುವ ಕಾಮಗಾರಿಯ ಟೆಂಡರಿನಲ್ಲಿ ಭಾಗವಹಿಸಲು ಅರ್ಹರಿರುತ್ತಾರೆ. ಈ ರೀತಿ ಹಿಂದೆ ಕಾಮಗಾರಿ ನಿರ್ವಹಿಸಿ ಪೂರ್ಣಗೊಳಿಸಿರುವ ಬಗ್ಗೆ ಸಂಬಂಧಪಟ್ಟ ಎಕ್ಸಿಕ್ಯೂಟಿವ್ ಇಂಜಿನಿಯರ್ ರವರಿಂದ ಪಡೆದಿರುವ ದೃಢೀಕರಣ ಪತ್ರದ ಪ್ರತಿಗಳನ್ನು ತಾಂತ್ರಿಕ ಬಿಡ್ಡಿನ ಲಕೋಟೆಯೊಳಗೆ ಒದಗಿಸತಕ್ಕದ್ದು.
5) ಅರ್ಹ ಗುತ್ತಿಗೆದಾರರು ಖಾಲಿ ಟೆಂಡರು ಡಾಕ್ಯೂಮೆಂಟನ್ನು ಪಡೆದುಕೊಳ್ಳುವಾಗ ಗುತ್ತಿಗೆದಾರರು ನೋಂದಣಿಯ ಮೂಲ ಪಾಸು ಪುಸ್ತಕವನ್ನು ನೀಡಿ ಅದರಲ್ಲಿ ಖಾಲಿ ಟೆಂಡರು ಡಾಕ್ಯುಮೆಂಟನ್ನು ಪಡೆದುದಕ್ಕೆ ಈ ಕಛೇರಿಯಿಂದ ಹಿಂಬರಹ ಪಡೆದುಕೊಳ್ಳತಕ್ಕದ್ದು.
6) ಪೂರ್ವಭಾವಿಯಾಗಿ ಬೇಕಾಗಿರುವ ಅರ್ಹತೆಗಳ ಬಗ್ಗೆ ತಾಂತ್ರಿಕ ಬಿಡ್ಡು ಲಕೋಟೆಯಲ್ಲಿ ಒದಗಿಸಬೇಕಾದ ವಿವರಗಳು ಮತ್ತು ದೃಢೀಕರಣಗಳ ಪ್ರತಿಗಳು.
   ಅ) ಸಾಮಾನ್ಯ ಮಾಹಿತಿ.
   ಆ) ಸಾಮಾನ್ಯ ಅನುಭವವುಳ್ಳ ದಾಖಲೆಗಳು.
   ಇ) ಯಥಾ ರೀತಿಯ ಕಾಮಗಾರಿಗಳನ್ನು ನಿರ್ವಹಿಸಿ ಅನುಭವವುಳ್ಳ ಬಗ್ಗೆ ವಿವರವಾದ ದಾಖಲೆಗಳು.
   ಈ) ನಿರ್ದಿಷ್ಟಪಡಿಸಿರುವ ಕಾಮಗಾರಿ ನಿರ್ವಹಿಸಿರುವ ಬಗ್ಗೆ ದಾಖಲಾತಿ.
   ಉ) ಪ್ರಸ್ತುತ ಹಾಲಿ ಹೊಂದಿರುವ ಕಾಮಗಾರಿಗಳ ವಿವರ.
   ಊ) ಗುತ್ತಿಗೆದಾರರು ಹೊಂದಿರುವ ಯಂತ್ರೋಪಕರಣಗಳು.

   **ಸೂಚನೆ:**

   1. ಯಂತ್ರೋಪಕರಣಗಳನ್ನು ಸ್ವಂತವಾಗಿ ಪಡೆದಿರುವ ಬಗ್ಗೆ ದಾಖಲೆಗಳ ಪ್ರತಿಗಳು ಮತ್ತು ಬಾಡಿಗೆಗೆ ಪಡೆಯ ಬೇಕಾಗಿರುವ ಯಂತ್ರೋಪಕರಣಗಳಿಗೆ ಮಾಲೀಕರಿಂದ ಬಾಡಿಗೆ ದೃಢೀಕರಣ ಪತ್ರಗಳನ್ನು ತಾಂತ್ರಿಕ ಬಿಡ್ಡಿನ ಲಕೋಟೆಯಲ್ಲಿ ಒದಗಿಸತಕ್ಕದ್ದು.
   2. ಈ ಮೇಲಿನ ಎಲ್ಲಾ ತಾಂತ್ರಿಕ ಬಿಡ್ಡಿನಲ್ಲಿ ಒದಗಿಸಿರುವ ಸಾಕ್ಷ್ಯಾಧಾರಗಳ ಡಾಕ್ಯುಮೆಂಟಿನ ಪ್ರತಿಗಳನ್ನು ಕರ್ನಾಟಕ ಸರ್ಕಾರದ ನೋಟರಿಯವರಿಂದಾಗಲೀ ಎಕ್ಸಿಕ್ಯೂಟಿವ್ ಇಂಜಿನಿಯರ್ ರವರಿಂದ ಅಥವಾ ಮೇಲ್ಪಟ್ಟ ಸರ್ಕಾರದ ಗೆಜೆಟೆಡ್ ಅಧಿಕಾರಿಗಳಿಂದ ದೃಢೀಕರಿಸಿ ತಾಂತ್ರಿಕ ಬಿಡ್ಡಿನ ಲಕೋಟೆಯೊಳಗೆ ಒದಗಿಸತಕ್ಕದ್ದು. ಹಾಗೂ ತಾಂತ್ರಿಕ ಬಿಡ್ಡಿನ ಲಕೋಟೆ ತೆರೆಯುವಾಗ ತಾಂತ್ರಿಕ ಬಿಡ್ಡಿನ ಪರಿಶೀಲನೆ ಪ್ರಕ್ರಿಯೆ ನಡೆಸುವುದಕ್ಕೆ ಸಾಕ್ಷ್ಯಾಧಾರಗಳ ದಾಖಲಾತಿಗಳ ಮೂಲ ಪ್ರತಿಗಳನ್ನು ಒದಗಿಸತಕ್ಕದ್ದು.
7) ಈ ಕಛೇರಿಯಿಂದ ಒದಗಿಸಲಾಗಿರುವ ಖಾಲಿ ಟೆಂಡರು ಷೆಡ್ಯೂಲ್‌ನ ಷೆಡ್ಯೂಲ್-ಬಿ ನಲ್ಲಿ ಗುತ್ತಿಗೆದಾರರು ದರ ಮತ್ತು ಕೆಲಸದ ಮೊತ್ತ ನಮೂದಿಸಿ ಆರ್ಥಿಕ ಬಿಡ್ಡಿನ ಲಕೋಟೆಯೊಳಗೆ ಸಲ್ಲಿಸತಕ್ಕದ್ದು.
8) ತಾಂತ್ರಿಕವಾಗಿ ಅರ್ಹರಾದ ಟೆಂಡರುದಾರರ ಆರ್ಥಿಕ ಬಿಡ್ಡನ್ನು ಸಮರ್ಥ ಅಧಿಕಾರಿಯವರಿಂದ ತಾಂತ್ರಿಕ ಬಿಡ್‌ಗೆ ಅಂಗೀಕಾರ ಪಡೆದ ನಂತರ ಸೂಕ್ತ ದಿನಾಂಕದಂದು ತೆರೆಯಲಾಗುವುದು. ಈ ಬಗ್ಗೆ ತಾಂತ್ರಿಕವಾಗಿ ಅರ್ಹತೆ ಹೊಂದಿದ ಟೆಂಡರುದಾರರುಗಳಿಗೆ ತಿಳಿಸಲಾಗುವುದು.
9) ಯಾವುದೇ ಟೆಂಡರನ್ನು ಒಪ್ಪುವ ಮತ್ತು ತಿರಸ್ಕರಿಸುವ ಹಕ್ಕನ್ನು ಕಾದಿರಿಸಲಾಗಿದೆ.

**ರಾಮಣ್ಣ**

ಪಿ.ಆರ್. 96 ಎಕ್ಸಿಕ್ಯೂಟಿವ್ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ತುಮಕೂರು.

